ಹಣಾ ಸರ್ಕಾರ

ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2230 |
| ಸದಸ್ಯರ ಹೆಸರು | ಶ್ರೀ ಜಿ.ರಘು ಆಚಾರ್<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 26.03.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಆತ್ಮಹತ್ಯೆ ಮಾಡಿಕೊಂಡಿರುವ ರೈತರ ಸಂಖ್ಯೆ ಎಷ್ಟು:(ಜಿಲ್ಲಾವಾರು ಮಾಹಿತಿ ಒದಗಿಸುವುದು) | ಕರ್ನಾಟಕ ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಸಾಲದ ಭಾದೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತರ ಜಿಲ್ಲಾವಾರು ವಿವರವನ್ನು ಅನುಬಂಧ-1 ಮತ್ತು ಅನುಬಂಧ-2 ರಲ್ಲಿ ನೀಡಲಾಗಿದೆ.. |
| ಆ) | ರೈತರ ಆತ್ಮಹತ್ಯೆಗೆ ಕಾರಣವೇನು: ಈ ಕುರಿತು ತನಿಖೆ ನಡೆದಿದೆಯೇ: | ರೈತರ ಆತ್ಮಹತ್ಯೆ ಕುರಿತು ಅಧ್ಯಯನ ನಡೆಸಲು ಸರ್ಕಾರವು 2001 ರಲ್ಲಿ ಡಾ. ಜಿ.ಕೆ. ವೀರೇಶ್, ನಿವೃತ್ತ ಉಪಕುಲಪತಿಗಳು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು, ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿತ್ತು. ಸದರಿ ಸಮಿತಿಯು ರೈತರ ಆರ್ಥಿಕ ಪರಿಸ್ಥಿತಿ, ಸಾಮಾಜಿಕ ಮತ್ತು ಸಾಂಸಾರಿಕ ಸಮಸ್ಯೆಗಳು, ಸಾಮರ್ಥ್ಯಕ್ಕೆ ಮೀರಿ ಸಾಲ, ಬೆಳೆ ನಷ್ಟ ಇವೇ ಮುಂತಾದವು ರೈತರ ಆತ್ಮಹತ್ಯೆಗೆ ಕಾರಣಗಳಾಗಿರುತ್ತವೆಂದು ವರದಿ ನೀಡಿರುತ್ತದೆ.<br><br>ಸರ್ಕಾರದ ಆದೇಶದ ಸಂಖ್ಯೆ: ಕೃತೋಇ 280 ಕೃಉಇ 2003 ದಿನಾಂಕ: 18.07.2003 ರಂತೆ ರೈತರ ಆತ್ಮಹತ್ಯೆಗಳಿಗೆ ಸಾಲ ನೀಡುವ ಸಂಸ್ಥೆಗಳಿಂದ ಪಡೆದ ಸಾಲದ ಹೊರೆಯೇ ಕಾರಣ ಎಂಬ ವಿಷಯವನ್ನು ಖಾತರಿ ಮಾಡಿಕೊಂಡು ಧೃಡೀಕರಣ ಪತ್ರ ನೀಡುವ ಸಲುವಾಗಿ ಕಂದಾಯ ಇಲಾಖೆಯ ಪ್ರತಿ ಉಪ ವಿಭಾಗೀಯ ಆಯುಕ್ತರವರ (ಉಪ ವಿಭಾಗಾಧಿಕಾರಿ) ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿದ್ದು, ಸಮಿತಿಯು ತೀರ್ಮಾನಿಸುವ ಪ್ರತಿ ಅರ್ಹ ಪ್ರಕರಣಗಳಿಗೆ ದಿನಾಂಕ:01.04.2015 ರಿಂದ ರೂ.5.00 ಲಕ್ಷಗಳ ಪರಿಹಾರ ಧನವನ್ನು ನೀಡಲಾಗುತ್ತಿದೆ. |
| ಇ) | ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬದವರಿಗೆ ಪರಿಹಾರ ಧನ ಒದಗಿಸಲಾಗಿದೆಯೇ?(ಮಾಹಿತಿ ಒದಗಿಸುವುದು) . | 2017-18 ನೇ ಸಾಲಿನಲ್ಲಿ ಸಾಲದ ಭಾದೆಯಿಂದ 1320 ರೈತರ ಆತ್ಮಹತ್ಯೆ ಪ್ರಕರಣಗಳು ವರದಿಯಾಗಿದ್ದು, ಸಮಿತಿಯಲ್ಲಿ ಪುರಸ್ಕೃತವಾದ ಒಟ್ಟು 1048 ಅರ್ಹ ಪ್ರಕರಣಗಳಿಗೆ ಪರಿಹಾರ ಧನವನ್ನು ಒದಗಿಸಲಾಗಿದೆ.<br><br>2018-19 ನೇ ಸಾಲಿನಲ್ಲಿ ಸಾಲದ ಭಾದೆಯಿಂದ 1076 ರೈತರ ಆತ್ಮಹತ್ಯೆ ಪ್ರಕರಣಗಳು ವರದಿಯಾಗಿದ್ದು, ಸಮಿತಿಯಲ್ಲಿ |

| | | |
|---|---|---|
| | | ಪುರಸ್ಕೃತವಾದ ಒಟ್ಟು 862 ಅರ್ಹ ಪ್ರಕರಣಗಳಿಗೆ ಪರಿಹಾರ ಧನವನ್ನು ಒದಗಿಸಲಾಗಿದೆ.<br><br>2019-20 ನೇ ಸಾಲಿನಲ್ಲಿ ಸಾಲದ ಭಾದೆಯಿಂದ 1064 ರೈತರ ಆತ್ಮಹತ್ಯೆ ಪ್ರಕರಣಗಳು ವರದಿಯಾಗಿದ್ದು, ಸಮಿತಿಯಲ್ಲಿ ಪುರಸ್ಕೃತವಾದ ಒಟ್ಟು 819 ಅರ್ಹ ಪ್ರಕರಣಗಳ ಪೈಕಿ 699 ಪ್ರಕರಣಗಳಿಗೆ ಪರಿಹಾರ ಧನವನ್ನು ಒದಗಿಸಲಾಗಿದ್ದು, 120 ಪ್ರಕರಣಗಳಿಗೆ ಪರಿಹಾರ ಧನವನ್ನು ವಿತರಿಸಬೇಕಾಗಿರುತ್ತದೆ.<br><br>ಮುಂದುವರೆದು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 43 ವೆಚ್ಚ-4/2020, ,ದಿನಾಂಕ:19.02.2020 ರಂತೆ 2020-21ನೇ ಸಾಲಿನಿಂದ ಕಂದಾಯ ಇಲಾಖೆಯ ಲೆಕ್ಕ ಶೀರ್ಷಿಕೆ: 2235-60-102-1-08-100 ರ ಪಿ.ಡಿ ಖಾತೆಯಿಂದ ಸದರಿ ಪ್ರಕರಣಗಳಿಗೆ ಪರಿಹಾರ ಒದಗಿಸಲು ಅವಕಾಶ ಕಲ್ಪಿಸಲಾಗಿದೆ. |

**ಸಂಖ್ಯೆ: AGRI-ACT/68/ 2021**

(ಬಿ.ಸಿ. ಪಾಟೀಲ್)
**ಕೃಷಿ ಸಚಿವರು**

ಅನುಬಂಧ-1

# 2017–18 ಮತ್ತು 2018–19ನೇ ಸಾಲಿನ ರೈತರ ಆತ್ಮಹತ್ಯೆ ವಿವರ

| | | 2017-18 | | | | 2018-19 | | | |
|---|---|---|---|---|---|---|---|---|---|
| | | 1 | 2 | 3 | 4 | 1 | 2 | 3 | 4 |
| 1 | ಬಾಗಲಕೋಟೆ | 36 | 3 | 33 | 33 | 25 | 4 | 21 | 21 |
| 2 | ಬಳ್ಳಾರಿ | 18 | 2 | 16 | 16 | 24 | 5 | 19 | 19 |
| 3 | ಬೆಂ. ಗ್ರಾಮಾಂತರ | 5 | 3 | 2 | 2 | 4 | 1 | 3 | 3 |
| 4 | ಬೆಂ. ನಗರ | 2 | 0 | 2 | 2 | 0 | 0 | 0 | 0 |
| 5 | ಬೆಳಗಾವಿ | 96 | 16 | 80 | 80 | 105 | 13 | 92 | 92 |
| 6 | ಬೀದರ್ | 82 | 14 | 68 | 68 | 57 | 13 | 44 | 44 |
| 7 | ಚಾಮರಾಜನಗರ | 6 | 1 | 5 | 5 | 4 | 0 | 4 | 4 |
| 8 | ಚಿಕ್ಕಬಳ್ಳಾಪುರ | 6 | 0 | 6 | 6 | 5 | 0 | 5 | 5 |
| 9 | ಚಿಕ್ಕಮಗಳೂರು | 92 | 30 | 62 | 62 | 43 | 8 | 35 | 35 |
| 10 | ಚಿತ್ರದುರ್ಗ | 42 | 7 | 35 | 35 | 33 | 9 | 24 | 24 |
| 11 | ದಕ್ಷಿಣ ಕನ್ನಡ | 1 | 0 | 1 | 1 | 5 | 2 | 3 | 3 |
| 12 | ದಾವಣಗೆರೆ | 76 | 15 | 61 | 61 | 53 | 15 | 38 | 38 |
| 13 | ಧಾರವಾಡ | 67 | 11 | 56 | 56 | 47 | 12 | 35 | 35 |
| 14 | ಗದಗ | 34 | 10 | 24 | 24 | 25 | 8 | 17 | 17 |
| 15 | ಹಾಸನ | 94 | 19 | 75 | 75 | 44 | 21 | 23 | 23 |
| 16 | ಹಾವೇರಿ | 75 | 10 | 65 | 65 | 80 | 7 | 73 | 73 |
| 17 | ಕಲಬುರಗಿ | 60 | 7 | 53 | 53 | 76 | 9 | 67 | 67 |
| 18 | ಕೊಡಗು | 9 | 3 | 6 | 6 | 12 | 2 | 10 | 10 |
| 19 | ಕೋಲಾರ | 7 | 0 | 7 | 7 | 6 | 1 | 5 | 5 |
| 20 | ಕೊಪ್ಪಳ | 36 | 7 | 29 | 29 | 29 | 4 | 25 | 25 |
| 21 | ಮಂಡ್ಯ | 108 | 25 | 83 | 83 | 74 | 12 | 62 | 62 |
| 22 | ಮೈಸೂರು | 130 | 48 | 82 | 82 | 81 | 17 | 64 | 64 |
| 23 | ರಾಯಚೂರು | 30 | 6 | 24 | 24 | 43 | 13 | 30 | 30 |
| 24 | ರಾಮನಗರ | 15 | 4 | 11 | 11 | 15 | 4 | 11 | 11 |
| 25 | ಶಿವಮೊಗ್ಗ | 53 | 8 | 45 | 45 | 41 | 8 | 33 | 33 |
| 26 | ತುಮಕೂರು | 49 | 11 | 38 | 38 | 44 | 8 | 36 | 36 |
| 27 | ಉಡುಪಿ | 3 | 0 | 3 | 3 | 1 | 0 | 1 | 1 |
| 28 | ಉ.ಕನ್ನಡ | 7 | 2 | 5 | 5 | 8 | 4 | 4 | 4 |
| 29 | ವಿಜಯಪುರ | 27 | 6 | 21 | 21 | 38 | 2 | 36 | 36 |
| 30 | ಯಾದಗಿರಿ | 54 | 4 | 50 | 50 | 54 | 12 | 42 | 42 |
| | ಒಟ್ಟು | 1320 | 272 | 1048 | 1048 | 1076 | 214 | 862 | 862 |

1. ವರದಿಯಾದ ಪ್ರಕರಣಗಳು 2. ತಿರಸ್ಕೃತಗೊಂಡ ಪ್ರಕರಣಗಳು 3. ಸಮಿತಿಯು ಅರ್ಹ ಪ್ರಕರಣವೆಂದು ತೀರ್ಮಾನಿಸಿದ ಪ್ರಕರಣಗಳು
4.ಪರಿಹಾರ ವಿತರಿಸಿರುವ ಅರ್ಹ ಪ್ರಕರಣಗಳು

ಅನುಬಂಧ-2

## 2019–2020 ಸಾಲಿನ ರೈತರ ಆತ್ಮಹತ್ಯೆ ವರದಿ

| ಕ್ರ.ಸಂ. | ಜಿಲ್ಲೆಗಳು | ವರದಿಯಾದ ಪ್ರಕರಣಗಳು | ತಿರಸ್ಕೃತ ಪ್ರಕರಣಗಳು | ಅರ್ಹ ಪ್ರಕರಣಗಳು | ಪರಿಹಾರ ಧನ ವಿತರಿಸಿರುವುದು | ಪರಿಹಾರ ಧನ ವಿತರಿಸಲು ಬಾಕಿ | ತೀರ್ಮಾನಿಸಲು ಬಾಕಿ ಇರುವ ಪ್ರಕರಣಗಳು | ಎಫ್.ಎಸ್.ಎಲ್ ವರದಿಗಾಗಿ | ಇತರೆ ದಾಖಲಾತಿಗಾಗಿ |
|---|---|---|---|---|---|---|---|---|---|
| 1 | ಬಾಗಲಕೋಟೆ | 30 | 2 | 26 | 26 | 0 | 2 | 0 | 2 |
| 2 | ಬಳ್ಳಾರಿ | 38 | 1 | 32 | 31 | 1 | 5 | 3 | 2 |
| 3 | ಬೆಂಗಳೂರು (ಗ್ರಾ) | 1 | 0 | 1 | 1 | 0 | 0 | 0 | 0 |
| 4 | ಬೆಂಗಳೂರು (ನ) | 1 | 0 | 1 | 1 | 0 | 0 | 0 | 0 |
| | ಬೆಳಗಾವಿ | 81 | 12 | 55 | 50 | 5 | 14 | 8 | 6 |
| 6 | ಬೀದರ್ | 62 | 16 | 46 | 46 | 0 | 0 | 0 | 0 |
| 7 | ಚಾಮರಾಜನಗರ | 2 | 0 | 2 | 1 | 1 | 0 | 0 | 0 |
| 8 | ಚಿಕ್ಕಬಳ್ಳಾಪುರ | 3 | 0 | 3 | 1 | 2 | 0 | 0 | 0 |
| 9 | ಚಿಕ್ಕಮಗಳೂರು | 63 | 6 | 55 | 50 | 5 | 2 | 2 | 0 |
| 10 | ಚಿತ್ರದುರ್ಗ | 44 | 10 | 34 | 34 | 0 | 0 | 0 | 0 |
| 11 | ದಕ್ಷಿಣಕನ್ನಡ | 2 | 0 | 2 | 2 | 0 | 0 | 0 | 0 |
| 12 | ದಾವಣಗೆರೆ | 39 | 15 | 24 | 15 | 9 | 0 | 0 | 0 |
| 13 | ಧಾರವಾಡ | 78 | 25 | 53 | 28 | 25 | 0 | 0 | 0 |
| 14 | ಗದಗ | 37 | 14 | 23 | 11 | 12 | 0 | 0 | 0 |
| 15 | ಹಾಸನ | 35 | 4 | 31 | 31 | 0 | 0 | 0 | 0 |
| 16 | ಹಾವೇರಿ | 99 | 16 | 77 | 59 | 18 | 6 | 0 | 6 |
| 13 | ಕಲಬುರಗಿ | 79 | 0 | 68 | 68 | 0 | 11 | 0 | 11 |
| 18 | ಕೊಡಗು | 9 | 0 | 9 | 3 | 6 | 0 | 0 | 0 |
| 19 | ಕೋಲಾರ | 4 | 0 | 4 | 2 | 2 | 0 | 0 | 0 |
| 20 | ಕೊಪ್ಪಳ | 23 | 7 | 16 | 16 | 0 | 0 | 0 | 0 |
| 21 | ಮಂಡ್ಯ | 57 | 7 | 50 | 50 | 0 | 0 | 0 | 0 |
| 22 | ಮೈಸೂರು | 68 | 14 | 48 | 28 | 20 | 6 | 0 | 6 |
| 23 | ರಾಯಚೂರು | 21 | 11 | 10 | 10 | 0 | 0 | 0 | 0 |
| 24 | ರಾಮನಗರ | 7 | 1 | 6 | 5 | 1 | 0 | 0 | 0 |
| 25 | ಶಿವಮೊಗ್ಗ | 45 | 7 | 37 | 34 | 3 | 1 | 0 | 1 |
| 26 | ತುಮಕೂರು | 33 | 7 | 25 | 24 | 1 | 1 | 0 | 1 |
| 27 | ಉಡುಪಿ | 1 | 0 | 1 | 0 | 1 | 0 | 0 | 0 |
| 28 | ಉತ್ತರಕನ್ನಡ | 8 | 0 | 7 | 6 | 1 | 1 | 0 | 1 |
| 29 | ವಿಜಯಪುರ | 53 | 2 | 49 | 49 | 0 | 2 | 0 | 2 |
| 30 | ಯಾದಗಿರಿ | 41 | 8 | 24 | 17 | 7 | 9 | 0 | 9 |
| | ಒಟ್ಟು | 1064 | 185 | 819 | 699 | 120 | 60 | 13 | 47 |

ಕೃಷಿ ನಿರ್ದೇಶಕರು